ನನಿಶ್ಚಿತಾರ್ಥಾತ್ ವಿರಮಂತಿ ಧೀರಾಃ

# ಆಯುರ್ವೇದ

ಕನ್ನಡ ಮಾಸ ಪತ್ರಿಕೆ




ವಾರ್ಷಿಕ ಚಂದಾ ರೂ. ೩ ಬಿಡಿ ಸಂಚಿಕೆ ಆಣೆ ೪ [ಕಾರ್ಕಳ, ದ. ಭಾರತ]

ಸಂಪುಟ ೯] ಜೂನ್ June ಜ್ಯೇಷ್ಠ 1957 [ಸಂಚಿಕೆ ೬




## ವೈದ್ಯ ಗಣಪತಿ ರಾವ್ ನೀಲಕಂಠ ರಾವ್ ಪಟವರ್ಧನ

ಆಯುರ್ವೇದ ತೀರ್ಥ, ಶಿರ್ಸಿ.

ಆಯುರ್ವೇದದ ನಿಜ ಸಂಪತ್ತುಗಳನ್ನು ನಾವು ಪರಿಗಣಿಸುವಲ್ಲಿ, ಶಿರ್ಸಿಯ ವೈದ್ಯ ನೀಲಕಂಠರಾವ್ ಪಟವರ್ಧನ ಇವರನ್ನೂ ಆಯುರ್ವೇದದ ನಿಜ ಸಂಪತ್ತುಗಳಲ್ಲಿ ಪರಿಗಣಿಸಿಕೊಳ್ಳಬೇಕಾಗಿದೆ. ವನಸ್ಪತಿ ವಿಚಾರ ಇವರ ಪರಿಶ್ರಮ, ಪಾಂಡಿತ್ಯ ಸಂಗ್ರಹ ಅಷ್ಟಿಷ್ಟಲ್ಲ "ಜೀವಂತ ನಿಘಂಟುವೇ ಇವರಾದರು. ಇಂಥಾ ವೈದ್ಯ ಮಹಾನುಭಾವರ ಹಿರಿಯ ಸುಪುತ್ರರೇ ಈ ವೈದ್ಯ ಗಣಪತಿರಾಯ ಪಟವರ್ಧನರು ಇವರ ಸವಿಸ್ತರ ಪರಿಚಯವನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು.



# ಶಬ್ದ ಚಿಕಿತ್ಸಾ ವಿಧಾನ

ಅರ್ಥಾತ್

# PHONOPATHY



ಲೇಖಕ: — ನ. ಭ.

"ಅದರ ಗುಣದೋಷಗಳನ್ನು ತಿಳಿದ ಸಮರ್ಥ ತಜ್ಞನು ಪ್ರಯೋಗಿಸುವ (ಉಚ್ಚರಿಸುವ) ಒಂದು ನಿರ್ದಿಷ್ಟ ಶಬ್ದ ಯಾ ಶಬ್ದ ಸಮೂಹವು ಅದರ ಸಮಕಾಲಿಕ ಹಾಗೂ ಸಮಮೌಲಿಕ ನಿರ್ದಿಷ್ಟ ವಾಯು, ನಿರ್ದಿಷ್ಟ ಕಿರಣ, ನಿರ್ದಿಷ್ಟ ಲೋಹ, ನಿರ್ದಿಷ್ಟ ರಸಾಯನಿಕ ದ್ರವ್ಯ ಹಾಗೂ ನಿರ್ದಿಷ್ಟ ವನಸ್ಪತಿಯಿಂದಾಗುವ ಪರಿಣಾಮವನ್ನೇ ಬೀರುವುದೆಂಬುದು ನಿಃಸಂದೇಹ"

## ಶಬ್ದ ಚಿಕಿತ್ಸಾ ವಿಧಾನ ಅರ್ಥಾತ್ **Phonopathy**

'ಚರಿತ್ರೆಯು ಪುನರಾವರ್ತಿಸುತ್ತಾ ಇದೆ' ಎಂದು ಬಲ್ಲವರ ಮಾತಿದೆಯಷ್ಟೆ! ಈ ಸತ್ಯವು ಪ್ರಪಂಚದ ಹಾಗೂ ವಿಶೇಷತಃ ಮಾನವನ ಇತರ ಎಲ್ಲಾ ವಿಷಯಗಳಿಗೂ ಅನ್ವಯಿಸುವಂತೆಯೇ ರೋಗ ಚಿಕಿತ್ಸಾ ವಿಧಾನಗಳಿಗೂ ಅನ್ವಯಿಸುವುದೆಂದರೆ ಅತಿಶಯೋಕ್ತಿಯಾಗಲಾರದು.

ಮಾನವನ ನಾಗರಿಕತೆಯು ಬರೀ ನಾಲ್ಕಾರು ಸಹಸ್ರ ವರ್ಷಗಳಿಂದೀಚೆಗೆ ಆರಂಭವಾಗಿ ಪ್ರವರ್ಧಮಾನವಾಗುತ್ತಾ ಬಂದಿದೆ ಎಂಬುದಾಗಿ ಪಾಶ್ಚಾತ್ಯ ವಿದ್ವಾಂಸರ ಬಹುಮತವಾಗಿದೆ. ಆದರೆ ಈ ವಾದವನ್ನು ಯುಕ್ತಿ ಯುಕ್ತವಾಗಿಯೂ ತರ್ಕಬದ್ಧವಾಗಿಯೂ ಅಲ್ಲಗಳೆದು ಪ್ರಾಚೀನ ತತ್ವಜ್ಞಾನಿಗಳ ಅಭಿಪ್ರಾಯವನ್ನು

ಎತ್ತಿಹಿಡಿಯಲು ಅರ್ಹತೆಯುಳ್ಳವರು ಕಾಣಿಸಿಕೊಳ್ಳದಿರುವ ಈ ಕಾಲದಲ್ಲಿ ಅಂತಹ ಚರ್ಚಾಸ್ಪದ ವಿಷಯಗಳ ಶೃಂಖಲಾಬಂಧವಿರುವ ವಿಷಯಗಳಲ್ಲಿ ಏನನ್ನಾದರೂ ಹೇಳುವುದಾಗಲೀ, ಬರೆಯುವುದಾಗಲೀ ಬಹಳ ದುಸ್ತರವಾಗುವುದರಲ್ಲಿ ಸಂದೇಹವಿಲ್ಲ. ಆದರೂ ಮಾನವನ ಸಾಮಾನ್ಯ ತಿಳುವಳಿಕೆ (Commonsence)ಯು ಹಸಿವು ಕೆರಳಿರುವ ಈ ಕಾಲವು ನಿಜಕ್ಕೂ ಒಂದು ಸುವರ್ಣಯುಗವೇ ಸರಿ. ಆ ದೃಷ್ಟಿಯಿಂದ ಸಾಫಿಲ್ಲಿ ಕೇವಲ ದಿಗ್ದರ್ಶನ ಮಾತ್ರ ಮಾಡಲೆಳಸುವ ವಿಷಯವನ್ನು ಜಿಜ್ಞಾಸುಗಳಾದ ವಿದ್ವಾಂಸರು ವಿವೇಚಿಸಿದಲ್ಲಿ ಅದರಲ್ಲಿನ ತಥ್ಯಾಂಶವು ಅವರಿಗೆ ಗೋಚರಿಸದೆ ಇರಲಾರದು.

ದೇಹದ ಮೇಲೆ ಮನಸ್ಸಿನ ಪರಿಣಾಮವಿರುವುದು ಸರ್ವಶ್ರುತವಿರುವಂತೆಯೇ ಮನೋಶಾಸ್ತ್ರವನ್ನುವಂತೆ ಶಬ್ದಶಾಸ್ತ್ರದ ಒಂದಂಗವಾದ ಸಂಗೀತ ಶಾಸ್ತ್ರದ ಪರಿಣಾಮವು ಮನಸ್ಸಿನಮೇಲೆ ಆಗುವುದೆಂಬುದೂ ಸರ್ವಮಾನ್ಯವಿದೆ. ಅಮೇರಿಕ ಮುಂತಾದ ದೇಶಗಳಲ್ಲಿ ರೋಗಿಗಳ ಶೀಘ್ರ ಗುಣಕ್ಕಾಗಿಯೂ ಸಂಗೀತದ ಪ್ರಭಾವವನ್ನು ಅಳವಡಿಸಿಕೊಳ್ಳಲಾಗುವುದಂತೆ. ಇದೇ ದಿಶೆಯಲ್ಲಿ ಮುಂದರಿಯುತ್ತಾ ಹೋಗುವಾಗ್ಯೆ ಶಬ್ದಚಿಕಿತ್ಸಾ ವಿಧಾನ (Phonopathy) ಎಂಬ ಪ್ರತ್ಯೇಕ ಶಾಸ್ತ್ರದ ಕ್ರಮಬದ್ಧ ಪರಿಪುಷ್ಟಿಯೂ ಆಗುವುದರಲ್ಲಿ ಸಂದೇಹವಿಲ್ಲ

ಸೃಷ್ಟಿಯ ಆದಿಯಲ್ಲಿ ಆಕಾಶಮಾತ್ರವಿದ್ದು ಇಡೀ ವಿಶ್ವದಲ್ಲಿಂದು ಕಂಡು ಬರುವ ಯಾವತ್ತೂ ಶಕ್ತಿಗಳ ಮೂಲಭೂತ ಪರಮಾಣುಗಳು ಆಕಾಶದಲ್ಲಿ ತುಂಬಿಕೊಂಡಿದ್ದುವು. ಕಾಲಕ್ರಮೇಣ ಆಕಾಶದಿಂದ ವಾಯುವಿನ ಉತ್ಪತ್ತಿಯೂ, ವಾಯುವಿನಿಂದ ಅಗ್ನಿಯ ಉತ್ಪತ್ತಿಯೂ, ಅಗ್ನಿಯಿಂದ ಜಲದ ಉತ್ಪತ್ತಿಯೂ ಜಲದಿಂದ ಪ್ರಥ್ವಿಯ ಉತ್ಪತ್ತಿಯೂ ಆಯಿತೆಂದು ನಮ್ಮ ಪೂರ್ವಿಕರಾದ ಶಾಸ್ತ್ರಜ್ಞರು ಹೇಳಿರುತ್ತಾರೆ. ಸೃಷ್ಟಿಯ ನಾಶವಾಗುವಾಗ್ಯೂ ಇದೇಕ್ರಮದಿಂದ (ವಿಲೋಮಕ್ರಮದಿಂದ) ಆಗುವುದು. ಅಂದರೆ ಪೃಥ್ವಿಯು ಜಲದಲ್ಲಿ ಲೀನವಾಗುವುದು; ಜಲವು ಅಗ್ನಿಯಲ್ಲಿ ಲೀನವಾಗುವುದು; ತೇಜ (ಅಗ್ನಿ) ವಾಯುವಿನಲ್ಲಿ ಲೀನವಾಗಿ ವಾಯುವು ಆಕಾಶದಲ್ಲಿ ಲೀನವಾಗುವುದು. ಇದೇ ರೀತಿ ಪುನಃ ಸೃಷ್ಟಿ, ಪುನಃ ಲಯವೆಂಬ ಚಕ್ರವು ತಿರುಗುತ್ತಲೇ ಇದೆ.

ಮಾನವನ ತಿಳುವಳಿಕೆಯು ಕೂಡಾ ಇದೇ ರೀತಿಯಲ್ಲಿ ಪ್ರಥ್ವಿ, ತೇಜ, ವಾಯು, ಆಕಾಶಗಳ ವಿಷಯಕವಾಗಿ ಕ್ರಮಾಗತವಾಗಿ ಮುಂದರಿಯುತ್ತಾ ಹೋಗುತ್ತದೆ. ರೋಗ ಚಿಕಿತ್ಸಾ ವಿಧಾನಗಳಲ್ಲಿ ಕೂಡಾ ಇದೇ ರೀತಿ. ಮೊತ್ತ

ಮೊದಲು ಪೃಥ್ವಿ ಸಂಬಂಧದ ಚಿಕಿತ್ಸಾವಿಧಾನಗಳಿದ್ದರೆ ಕಾಲಕ್ರಮೇಣ ಜಲ-ಸಂಬಂಧದ, ಅಗ್ನಿಸಂಬಂಧದ, ವಾಯುಸಂಬಂಧದ ಹಾಗೂ ಆಕಾಶಸಂಬಂಧದ ಚಿಕಿತ್ಸಾ ವಿಧಾನಗಳು ಪ್ರತಿಯೊಂದು ಸೃಷ್ಟಿ-ಲಯುಗಳ ಅವಧಿಯಲ್ಲಿ ಉಪಯೋಗಕ್ಕೆ ಬಂದಿರಬೇಕು.

ಪೃಥ್ವಿ ಸಂಬಂಧವಾಗಿ ವನಸ್ಪತಿಗಳ ಉಪಯೋಗವೂ ಜಲಸಂಬಂಧವಾಗಿ ರಸಾಯನ ದ್ರವ್ಯಾದಿಗಳ ಉಪಯೋಗವೂ, ಅಗ್ನಿಸಂಬಂಧವಾಗಿ ಲೋಹಾದಿಗಳ ಹಾಗೂ ಕಿರಣಗಳ ಯಾ ಕಿರಣ ಸಮೂಹಗಳ ಉಪಯೋಗವೂ ಇರುವಂತೆ ವಾಯು ಸಂಬಂಧವಾಗಿ ವಿವಿಧವಾಯು (Gas)ಗಳ ಉಪಯೋಗವೂ ಆಕಾಶ ಸಂಬಂಧವಾಗಿ ಶಬ್ದ-ನಾದಗಳ ಉಪಯೋಗವೂ ಜಾರಿಗೆ ಬಂದಿರಬೇಕು.

ನಾಯಿ-ಬೆಕ್ಕು ಮುಂತಾದುವುಗಳಲ್ಲಿ ಕೂಡಾ ತಮಗೆ ಅಸೌಖ್ಯವಾದಾಗ, ವಿಶಿಷ್ಟ ಜಾತಿಯು ತೃಣ ಯಾ ಸೊಪ್ಪುಗಳನ್ನೂ ತಿನ್ನುವಂತೆ ಪ್ರೇರಿಸುವ ಬುದ್ಧಿಶಕ್ತಿಯನ್ನು ನಿಸರ್ಗವು ಸಂಯೋಜಿಸಿರುತ್ತದೆ. ಮಾನವನು ಕೂಡಾ ಮೊತ್ತಮೊದಲು ಹೀಗೆಯೇ ಕೆಲವು ವಿಶಿಷ್ಟ ಜಾತಿಯ ತೃಣಾದಿಗಳಿಂದ ರೋಗ ಚಿಕಿತ್ಸೆಯನ್ನು ಮಾಡಿಕೊಳ್ಳುತ್ತಿದ್ದಿರಬೇಕು. ನಂತರ ಅವನ ಸತ್ಯಾನ್ವೇಷಣ ಹಾಗೂ ಪ್ರಕೃತಿ ತತ್ವಾನ್ವೇಷಣದ ಕುತೂಹಲ ಕೆರಳಿ ಸಂಶೋಧನೆಗಳು ಮುಂದರಿದಂತೆಲ್ಲಾ, ವಿಶಿಷ್ಟ ಜಾತಿಯ ವನಸ್ಪತಿಯಲ್ಲಿರುವ ಶಕ್ತಿಯನ್ನು ವಿಶಿಷ್ಟ ರಾಸಾಯನಿಕ ದ್ರವ್ಯದಿಂದಲೂ ಪಡೆಯಬಹುದೆಂಬ ತರ್ಕದ ಆಧಾರದಿಂದ ರಾಸಾಯನಿಕ ದ್ರವ್ಯಗಳ ಉಪಯೋಗವು ಬಳಕೆಗೆ ಬಂದಿರಬೇಕು. ಅದೇ ರೀತಿ ವಿಶಿಷ್ಟ ವನಸ್ಪತಿಗಳು ಬೆಳೆಯುವ ಭೂಭಾಗದ ಭೂಗರ್ಭದಲ್ಲಿ ಅದೇ ಗುಣಧರ್ಮವಿರುವ ವಿಶಿಷ್ಟ ಲೋಹಾದಿಗಳು ಆವಿಷ್ಕರಿಸಲ್ಪಟ್ಟು ಲೋಹಾದಿಗಳು ಕೂಡಾ ಉಪಯೋಗಿಸಲ್ಪಟ್ಟಿರಬೇಕು. ಅದೇ ರೀತಿ ವಿಶಿಷ್ಟ ಜಾತಿಯ ಪ್ರಕಾಶ ಕಿರಣಗಳನ್ನೂ ವಾಯು (Gas)ಗಳನ್ನೂ ಬಳಸಿಕೊಂಡಿರಬೇಕು. ವಾಯುವಿನಲ್ಲಿ ಪರಮಾಣು ರೂಪದಿಂದ ಎಲ್ಲಾ ವಿಧದ ಮೂಲಭೂತ ಶಕ್ತಿಗಳು ಕೂಡಾ ಎಂದೆಂದಿಗೂ ನಾಶವಾಗದೇ ಶಾಶ್ವತವಾಗಿ ಇವೆ ಎಂಬುದು ಈಗಣ ಅಣುಯುಗದಲ್ಲಿ ಸ್ಫುಟವಾಗಿ ನುಂಡಟ್ಟಾಗುತ್ತಾ ಇದೆಯಷ್ಟೆ! ವಾಯುವಿನಲ್ಲಿರುವ ಎಲ್ಲಾ ಶಕ್ತಿಗಳೂ ಆಕಾಶದಲ್ಲಿಯೂ ಆಕಾಶ ಗುಣವಾದ ಶಬ್ದದಲ್ಲಿಯೂ ಕೂಡಾ ಇವೆಯೆಂಬುದು ನಮ್ಮ ಹಿರಿಯರಾದ ಶಾಸ್ತ್ರಕಾರರ ಮತವೂ ಹೌದು; ನಮ್ಮ ಸಾಮಾನ್ಯ ತಿಳುವಳಿಕೆಗೆ ಯುಕ್ತಿಯುಕ್ತವಾಗಿ ತೋರುವುದೂ ಹೌದು. ಆದುದರಿಂದಲೇ, ಅದರ ಗುಣದೋಷಗಳನ್ನು ತಿಳಿದ ಸಮರ್ಥ ತಜ್ಞನು ಪ್ರಯೋಗಿಸುವ (ಶಾಸ್ತ್ರೋಕ್ತಕ್ರಮ ಪ್ರಕಾರ ಉಚ್ಚರಿಸುವ)

ಒಂದು ನಿರ್ದಿಷ್ಟ ಶಬ್ದವು ಯಾ ಶಬ್ದ ಸಮೂಹವು ಅದರ ಸಮಕಾಲಿಕ ಹಾಗೂ ಸಮಮೌಲಿಕ ನಿರ್ದಿಷ್ಟ ವಾಯು, ನಿರ್ದಿಷ್ಟ ಕಿರಣ, ನಿರ್ದಿಷ್ಟ ಲೋಹ, ನಿರ್ದಿಷ್ಟ ರಾಸಾಯನಿಕ ದ್ರವ್ಯ ಯಾ ನಿರ್ದಿಷ್ಟ ವನಸ್ಪತಿಯಿಂದಾಗುವ ಪರಿಣಾಮವನ್ನೇ ಬೀರುವುದೆಂಬುದು ನಿಃಸಂದೇಹ. ಇದಕ್ಕೆ ಶಬ್ದ ಶಾಸ್ತ್ರದ ಅಗಾಧ ತಿಳುವಳಿಕೆ ಅನಿವಾರ್ಯ. ಅಕ್ಷರ (ನಾಶರಹಿತ)ಕ್ಕೆ ಎರಡು ರೂಪಗಳು. ಒಂದು ಸ್ವರ (ನಾದರೂಪ) ಇನ್ನೊಂದು ವರ್ಣ (ಕಿರಣ ರೂಪ) ಯಾವ ಅಕ್ಷರದ ಉಚ್ಚಾರಣೆಯಿಂದ ಯಾವ ವರ್ಣದ ಉತ್ಪತ್ತಿಯಾಗುವುದೆಂದು ತಿಳಿದವನು ಯಾವ ಕಿರಣವನ್ನು ಯಾವ ಚಿಕಿತ್ಸೆಗೆ ಹೇಗೆ ಬಳಸಿಕೊಳ್ಳಬೇಕೆಂದು ತಿಳಿಯ ಬಲ್ಲನು

ಜಾಗತಿಕ ನಿಃಶಸ್ತ್ರೀಕರಣದ ಮಾತುಕತೆಗಳು ನಿತ್ಯ ಕೇಳಿಬರುತ್ತಾ ಇವೆಯಷ್ಟೆ! ಅದೇ ಸಮಯದಲ್ಲಿ ಅಣುಬಾಂಬುಗಳು, ಜಲಜನಕ ಬಾಂಬುಗಳು ಹಾಗೂ Radio guided missels (ಶಬ್ದ ನಿಯಂತ್ರಿತ ಮಾರಕಾಸ್ತ್ರಗಳು) ಇವುಗಳ ಪ್ರಯೋಗಗಳ ಸುದ್ದಿಗಳೂ ಕೇಳಿ ಬರುತ್ತಲಿವೆ ವಿಜ್ಞಾನಿಗಳದ್ದು ಒಂದು ವರ್ಗ; ರಾಜಕಾರಣಿಗಳದ್ದು ಮಗದೊಂದು ವರ್ಗ. ವಿಜ್ಞಾನಿಗಳು ರಾತ್ರಿ ಹಗಲು ಅನ್ನ ನೀರು ಬಿಟ್ಟು ತದೇಕ ಮನಸ್ಕರಾಗಿ ಸಂಶೋಧನೆ ನಡಿಸಿ ಆವಿಷ್ಕರಿಸಿದ ಈ ಉಗ್ರ ಮಾರಕಾಸ್ತ್ರಗಳನ್ನು ಒಂದು ಪಕ್ಷ ರಾಜಕಾರಣಿಗಳು ಒಟ್ಟು ಸೇರಿ ಬಹಿಷ್ಕರಿಸಿದರೆಂದು ಇಟ್ಟುಕೊಳ್ಳೋಣ. ಈ ಮಾರಕಾಸ್ತ್ರಗಳ ಉತ್ಪಾದನೆಯು ಸಂಪೂರ್ಣವಾಗಿ ನಿಲ್ಲಿಸಲ್ಪಟ್ಟು, ಈ ವರೇಗೆ ಉತ್ಪಾದಿತ ಅಸ್ತ್ರಗಳು ನಾಶಗೊಳಿಸಲ್ಪಟ್ಟುವೆಂದೇ ಇಟ್ಟುಕೊಳ್ಳೋಣ – ಆಗಲಾದರೂ ವಿಜ್ಞಾನಿಗಳು ತಮ್ಮ ಅಮೂಲ್ಯ ಸಂಶೋಧನೆಯ ಫಲಿತಾಂಶಗಳನ್ನು ಜನಸಾಮಾನ್ಯಕ್ಕೆ ಅರ್ಥವಾಗದ ಶೈಲಿಯಲ್ಲಿ ಬರೆದಿಡುವರೇ ವಿನಹಾ (ಹೀಗೆ ಮಾಡುವುದರಿಂದ ಅವಿಚಾರಿ ರಾಜಕಾರಣಿಗಳು ಅಂಥಹ ಸಂಶೋಧನೆಗಳನ್ನು ವಿನಾಶಕಾರಿ ಚಟುವಟಿಕೆಗಳಿಗೆ ಉಪಯೋಗಿಸದಂತೆ ತಡೆಯಾಗುವುದು) ತಮ್ಮ ಸಂಶೋಧನಾ ಕಾರ್ಯವನ್ನು ನಿಲ್ಲಿಸಲಾರರು ಅಥವಾ ಸಂಶೋಧನೆಯ ಫಲಿತಾಂಶಗಳನ್ನು ವ್ಯರ್ಥಗೊಳಿಸಲಾರರು. ಮುಂಚಿನ ಕಾಲದಲ್ಲಿ ನಡೆದ ಹಲವಾರು ಇಂತಹ ಸಂಶೋಧನೆಗಳ ಫಲಿತಾಂಶಗಳೇ ವೇದವಾಕ್ಯಗಳ ರೂಪದಲ್ಲಿ ಜೋಪಾನವಾಗಿ ನಮ್ಮ ಹಿರಿಯರಿಂದ ನಮಗೆ ಬಂದಿರಬೇಕೆಂದು ನನ್ನ ನಂಬುಗೆ.

ವೇದಗಳ ಉಚ್ಚರಣಾದಿಗಳಲ್ಲಿ ವಿಧಿಸಿರುವ ಕಠಿಣ ನಿಬಂಧನೆಗಳನ್ನು ವಿವೇಚಿಸಿದಲ್ಲಿ ಅದು ಮೇಲೆ ಹೇಳಿದ ಅಭಿಪ್ರಾಯವನ್ನು ಸಮರ್ಥಿಸುವುದು ಹೊಳೆಯು

ದಿರದು. "ಆಚಾರ ಹೀನಂ ನ ಪುನಂತಿ ವೇದಾಃ" ॥ ಅಥಾತ್ "ಆಚಾರ ವಂತಂ ಹಿ ಪುನಂತಿ ವೇದಾಃ ॥" (ಆಚಾರವಂತಂ ವೇದಾಃ ಪುನಂತಿ ಹಿ = ಪುನಂತ್ಯೇವ)

"ಶಬ್ದ ಚಿಕಿತ್ಸಾ ವಿಧಾನ" (Phonopathy) ಎಂಬ ಶಿರೋನಾಮೆ ಯಿಂದಾರಂಬಿಸಿ ವೇದಗಳ ಮಹಾತ್ಮೆಯನ್ನು ಬರೆಯಲು ಉಪಕ್ರಮಿಸಿದೆನೆಂದು ಯಾರಾದರೂ ಭಾವಿಸಬಾರದು ಏಕೆಂದರೆ ಈ "ಶಬ್ದ ಚಿಕಿತ್ಸಾ ವಿಧಾನ (Phonopathy) ಎಂಬುದು ನನ್ನ ದೃಷ್ಟಿಯಲ್ಲಿ ವೇದಗಳ ಆಧಾರದ ಮೇಲೆಯೇ ನಿಂತಿದೆ. ಅಂದ ಮೇಲೆ ಸ್ವಲ್ಪಮಟ್ಟಿಗಾದರೂ ಇಲ್ಲಿ ವೇದಗಳ ಮಹಾತ್ಮೆ ಬಾರದೆ ನಿರ್ವಾಹವಿಲ್ಲ.

ವೇದಗಳ ಕೆಲವು ವಾಕ್ಯಗಳಲ್ಲಿ ಗಣಿತಾದಿ ವಿಷಯಗಳೂ, ಕೆಲವು ವಾಕ್ಯ ಗಳಲ್ಲಿ ಯಂತ್ರಾದಿಗಳ ರಚನೆಗೆ ಸಂಬಂಧಪಟ್ಟ ವಿಚಾರಗಳೂ ಇರುವಂತೆ ಇನ್ನೂ ಕೆಲವು ವಾಕ್ಯಗಳಲ್ಲಿ ಚಿಕಿತ್ಸಾವಿಧಾನಕ್ಕೆ ಸಂಬಂಧ ಪಟ್ಟ ವಿಚಾರಗಳೂ ಇವೆ ಯೆಂಬುದೇ ನಾನಿಲ್ಲಿ ಮುಖ್ಯವಾಗಿ ಹೇಳಬಯಸುವ ವಿಚಾರ.

ಜಗತ್ತಿನ ಎಲ್ಲಾ ವಸ್ತುಗಳೂ ಅವುಗಳಲ್ಲಿನ ಆಯಾಯ (Spirit) ಚೈತನ್ಯ ಕ್ಕೆ ಅಧಿಪತಿಯಾದ ಆಯಾಯ ದೇವತೆಯನ್ನು ಪ್ರತಿನಿಧೀಕರಿಸುವ ಆಯಾಯ ಬೀಜಾಕ್ಷರ ಅಥವಾ ಮಂತ್ರ ಸಮೂಹದಿಂದ ಪ್ರತಿನಿಧೀಕರಿಸಲ್ಪಟ್ಟವೆ. ನಿರ್ದಿಷ್ಟ ವಸ್ತುವಿನಿಂದಾಗುವ ಕೆಲಸವು ಅದರ ದೇವತಾಸಂಬಂಧಿ ಮಂತ್ರ ಯಾ ಅಕ್ಷರದಿಂದ ಲೂ ಆಗಲೇಬೇಕು. "ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂ ತು ದೈವತಂ" ಎಂದು ಹೇಳಲ್ಪಟ್ಟಿದೆ.

ಇಲ್ಲಿ ಒಂದು ವಿಷಯವನ್ನು ಮಾತ್ರ ಮುಖ್ಯವಾಗಿ ಗಮನಿಸಬೇಕು. "ಋಚೋ ಅಕ್ಷರೇ ಪರಮೇವ್ಯೋಮನ್ಯಸ್ಮಿನ್ ದೇವಾ ಅಧಿವಿಶ್ವೇ ನಿಶೇದುಃ ॥ ಯಸ್ತಂನವೇದಕಿಂ ಋಚಾಕರಿಷ್ಯತಿ. ಯ ಇತ್ತದ್ವಿದುಸ್ತ ಇ ಮೇಸಮಾಸತೇ ॥" ವೇದಋಕ್ಕುಗಳ ಅಕ್ಷರಗಳಲ್ಲಿ ವಿಶ್ವದ ಎಲ್ಲಾ ದೇವತೆಗಳೂ ಅವಾಸವಾಗಿವೆ. ಅವು ಎಲ್ಲೆಲ್ಲಿವೆಯೆಂಬುದನ್ನರಿಯದವನು ಋಕ್ಕುಗಳಿಂದ ಏನು ಮಾಡಿಯಾನು? ಅದರ ಮರ್ಮವನ್ನು ತಿಳಿದವನು ಎಲ್ಲವನ್ನೂ ಮಾಡಿಯಾನು!

ಉಚ್ಚಾರ ಮಾತ್ರದಿಂದ ವೇದಮಂತ್ರಗಳು ಪಾಪವನ್ನು ನಿರ್ಮೂಲಿಸುತ್ತವೆ ಯೆಂದು ಹೇಳಲ್ಪಟ್ಟಿದೆ. ವಿದ್ಯುತ್ ಶಕ್ತಿಯ ಗುಣದೋಷಗಳನ್ನೂ ಉತ್ಪತ್ತಿ ಆದಿ ಗಳನ್ನು ಏನೂ ತಿಳಿಯದವನಾದರೂ ಗುಂಡಿಯನ್ನೊತ್ತಿದರೆ ದೀಪವಾಗುವಂತೆಯೂ

ಮುಟ್ಟಿದರೆ "ಶೋಕ್" ಆಗುವಂತೆಯೂ ಅರ್ಥ ತಿಳಿಯದೆಯಾದರೂ ವೇದಮಂತ್ರಗಳನ್ನು ಉಚ್ಚರಿಸಿದ ಕೂಡಲೇ ಅದರ ಪರಿಣಾಮವು ದೇಹದ ಒಳಗಣ ವಿವಿಧ ಗ್ರಂಥಿ (Glands)ಗಳ ಮೇಲೆ ಆಗಿ ಅಲ್ಲಲ್ಲಿ ಜಮೆಯಾಗಿರುವ ದೋಷ (ಕಲ್ಮಷವು) ನಾಶವಾಗುವುದರ ಮೂಲಕ ವೇದಾಧ್ಯಯನವೇ ಒಂದು ರೋಗನಿರೋಧಕ (Preventive) ವಾಗಿರುತ್ತದೆ. ರೋಗನಿರೋಧಕಗಳಿದ್ದಾಗ್ಯೂ ರೋಗಗಳ ಉತ್ಪತ್ತಿಯು ಸಂಪೂರ್ಣ ನಿಲ್ಲುವುದಿಲ್ಲವೆಂಬುದು ಪ್ರಕೃತಿ ಸಹಜ. ಅಂತೆಯೇ ರೋಗೋತ್ಪತ್ತಿಯಾದ ನಂತರ ಅವಕ್ಕೊಂದು ಚಿಕಿತ್ಸೆ ಬೇಕಾಗುವುದೂ ಸಹಜ. ಮಂತ್ರಗಳಲ್ಲಿ ರೋಗನಿರೋಧಕ ಶಕ್ತಿ ಇರುವಂತೆಯೇ ರೋಗ ಚಿಕಿತ್ಸಕ ಹಲ ಮಂತ್ರಗಳೂ ಇವೆ. ಉದಾಹರಣೆಗಾಗಿ:— ಇತ್ತೀಚೆಗೆ ದೆಹಲಿಯಲ್ಲಿ ವಿಶ್ವದಾದ್ಯಂತದ ಪ್ರಮುಖ ವಿಜ್ಞಾನಿಗಳೂ ಚಿಕಿತ್ಸಾ ಪ್ರವೀಣರೂ ಸೇರಿ ಕ್ಷಯರೋಗ ನಿರೋಧ ಮತ್ತು ಚಿಕಿತ್ಸಾ ವಿಷಯವಾಗಿ ವಿಚಾರಗೋಷ್ಠಿ ನಡೆಸಿರುವರಷ್ಟೆ! ಅದೇ ಕ್ಷಯರೋಗದ ವಿಷಯವಾಗಿರುವ ಒಂದು ಮಂತ್ರವನ್ನು ಈ ಕೆಳಗೆ ಉದಾಹರಿಸುತ್ತೇನೆ:—

"ಮುಂಚಾಮಿತ್ವ ಹವಿಷಾ ಜೀವನಾಯಕಮಜ್ಞಾತಯಕ್ಷ್ಮಾತ್ ಉತ ರಾಜಯಕ್ಷ್ಮಾತ್ | ಗ್ರಾಹಿರ್ಜಗ್ರಾಹಯದಿ ವೈತದೇನಂ ತಸ್ಯಾ ಇಂದ್ರಾಗ್ನೀ ಪ್ರಮುಮುಕ್ತ ಮೇನಂ | ಯದಿಕ್ಷಿತಾಯುರ್ಯದಿವಾ ಪರೇತೋಯದಿ ಮೃತ್ಯೋರಂತಿಕಂ ನೀತ ಏವ | ತಮಾಹರಾಮಿ ನಿರ್ಋತೇ ರುಪಸ್ಥಾದಸ್ಪಾರ್ಶಮೇನಂ ಶತಶಾರದಾಯ |" ಎಂತಹ ಭೀಕರವಾದ, ಕೇಳಿ ತಿಳಿಯದ ರೀತಿಯ ಕ್ಷಯಕ್ಕೆ ಬಲಿಬಿದ್ದವನಾದಾಗ್ಯೂ, ಮೃತ್ಯುವಿನ ದವಡೆಗೆ ಸಿಲುಕಿಕೊಂಡವನಾದಾಗ್ಯೂ, ಅಂತಹವನನ್ನು ಕೂಡಾ ಸಂಪೂರ್ಣ ಶತಾಯುಸ್ಸಿಗೆ ಪುನಃ ತರುವುದಲ್ಲದೇ, ಕ್ಷಯದ ಸ್ಪರ್ಶಕೂಡಾ ಇಲ್ಲದಂತೆ "ಇಂದ್ರಾಗ್ನಿ"ಯು ಮಾಡುವುದೆಂಬರ್ಥವು ಮೇಲಿನ ಋಕ್ಕಿನಿಂದ ತಿಳಿಯುತ್ತದೆ. ಇಂತಹ ಭರವಸೆಯನ್ನು ಕೊಡಬೇಕಾದರೆ ಅಂತಹ ಮಂತ್ರ ಚಿಕಿತ್ಸೆಯನ್ನೇ ಸದ್ರಿ ಮಂತ್ರವು ಹೇಳಿರಬೇಕು. ಈ ಮಂತ್ರದ ನಿರಂತರ ಉಚ್ಚಾರಣೆ (ಆಚಾರಪುರಸ್ಸರವಾಗಿ) ಮಾಡಿದಲ್ಲಿ ಕ್ಷಯ ನಿವಾರಣೆಯಾಗಲೇಬೇಕು. ಅಥವಾ "ಇಂದ್ರಾಗ್ನಿ" ಎಂಬ ವಾಯುಮಿಶ್ರಣದಿಂದ ಹಾಗೂ "ಇಂದ್ರಾಗ್ನಿ" ಎಂಬ ಕಿರಣ (ಕಿರಣಮಿಶ್ರಣ) ದಿಂದ ಅಥವಾ "ಇಂದ್ರಾಗ್ನಿ" ಎಂಬ ರಸಾಯನ ಮಿಶ್ರಣ, ಲೋಹಮಿಶ್ರಣದಿಂದಲೂ "ಇಂದ್ರಾಗ್ನಿ" ದೇವತೆಗಳಿಂದ ಪ್ರತಿನಿಧೀಕರಿಸಲ್ಪಡುವ ಯಾವುದೇ ವಸ್ತು ಅಥವಾ ವನಸ್ಪತಿಯಿಂದ ಕ್ಷಯರೋಗದ ನಿವಾರಣೆಯಾಗಲೇಬೇಕು.

ಇಂದಿನ ತರುಣ ವಿಜ್ಞಾನಿಗಳಿಗೆ ವಿಶೇಷತಃ ನಮ್ಮ ತರುಣ ವಿಜ್ಞಾನಿಗಳಿಗೆ ಈ ದಿಶೆಯಲ್ಲಿ ಆಸಕ್ತಿವಹಿಸಿ ಸಂಶೋಧನೆ ನಡೆಸುವರೇ ಅನುಕೂಲತೆ

ಒದಗಿಸಲು ಸರಕಾರದ ಮುಖ ನೋಡುತ್ತಾ, ನಾವು ಕೂತುಕೊಳ್ಳದೆ ಅನಧಿಕಾರಿ ಸಂಘ ಸಂಸ್ಥೆಗಳ ಸಹಾಯದಿಂದ ಸಂಶೋಧನಾ ಕಾರ್ಯವನ್ನು ಮುಂದೊತ್ತಿದಲ್ಲಿ ನಾವು ಇಡೀ ಮಾನವ ಜನಾಂಗಕ್ಕೆ ಉಪಯುಕ್ತವಾಗುವ ಅನೇಕ ಶೋಧಗಳನ್ನು ಮಾಡಬಹುದಲ್ಲದೆ, ಆ ರೀತಿಯಿಂದ ಇಡೀ ಮಾನವ ಜನಾಂಗಕ್ಕೆ ಮತ್ತು ಶಾಂತಿ ವಿಸ್ತರಣಾ ಪವಿತ್ರ ಕಾರ್ಯಕ್ಕೆ ಅಗಾಧ ಸೇವೆ ಸಲ್ಲಿಸಿದಂತಾಗುತ್ತದೆ.

ಈ ದಿಶೆಯಲ್ಲಿ ಹೆಚ್ಚಿನ ವಿವರಗಳನ್ನು ಸಮಯ ಸಿಕ್ಕಿದಾಗ್ಗೆ
ಮುಂದಕ್ಕೆ ವಿಜ್ಞಾಪಿಸುವೆನು.

ಇತಿ ಶಂ.

ದಾಸಸಾಹಿತ್ಯದಲ್ಲಿ

# ಶ್ರೀ ಧನ್ವಂತರಿ ಮಹಾತ್ಮೆ

(ಕಲ್ಯಾಣಿ—ಝಂಪೆ)

ಎನ್ನ ಬಿನ್ನಪಕೇಳೋ ಧನ್ವಂತ್ರಿ ದಯಮಾಡೊ
ಸಣ್ಣವನು ಇವ ಕೇವಲ ॥ ಪ ॥
ಬನ್ನಬಡಿಸುವರೋಗ | ವನ್ನು ಮೋಚನಮಾಡಿ
ಚೆನ್ನಾಗಿ ಪಾಲಿಸುವದೋ | ಕರುಣೀ ॥ ಅ ॥
ಆರೋಗ್ಯ ಆಯುಸ್ಸು ಐಶ್ವರ್ಯವೆಂಬ ಈ
ಮೂರುವಿಧ ವಸ್ತುಂಗಳು |
ನಾರಾಯಣನ ಭಜಕರಿಂದವರ ಸಾಧನಕೆ
ಪೂರಣಕವಾಗಿಪ್ಪವೊ |
ಘೋರವ್ಯಭಿಚಾರ ಪರನಿಂದೆ ಪರವಿತ್ತಾ ಪ
ಹಾರಮಾಡಿದ ದೋಷದಿ ॥
ದರಿದ್ರರಾಗುವರು ಮೂರುವಿಧದಿಂದಲೇ
ಕಾರಣನು ನೀನೆ ದುಷ್ಕರ್ಮ ಪರಿಹರಿಸೊ ॥ ೧ ॥
ವಸುಮತಿಯು ಮೇಲಿನ್ನು ಅಸುರಜನರೇ ಬಹಳ
ಪರವಲ್ಲ ಕಲಿಯ ಬಾಧೆ |
ಬಿಸಿಲಿಂದ ಪೀಡಿತವಾದ ಸಸಿಗಳಂತೆ
ಶಿಶುಗಳು ನಾವಿಪ್ಪೆವೊ ।
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು
ಕುಶಲದಲಿ ಪಾಲಿಸುವದು ॥
ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು
ಅಸುನಾಥ ಹರಿಯೆ ಸಲಹೋ | ಸಾಮಿ ॥ ೨ ॥
ಅನ್ಯರನು ಭಜಿಸದೆಲೆ ನಿನ್ನನೇ ಸ್ಮರಿಸುತ್ತ |
ನಿನ್ನ ಚಿನ್ಹೆಗಳನ್ನೆ ಧರಿಸಿ |
ನಿನ್ನ ನಾಮೋಚ್ಚರಿಸಿ ನಿನ್ನವರನೆನಿಸಿ ।

ನೃಪಾ ವರ್ತಕ ಶುತ್ಥಂಶು ಯುಕ್ತ್ರಾವಿಂದು ದ್ರುಮಮೇವವಾ |
ಯಾನಿವೈಡಂಬಕಾಂಚ್ಯೈ (ಶ್ಚೈ) ವ ರಸಾಸ್ತು ಮಣಿಸಂಜ್ಞಕಾಃ || ೧೭೦ ||

ಮಹಾಮಣಿತ್ರಯಂಚಾನ್ಯಕ್ಷಣೌತ್ಸರ್ವಂಚ ಬಂಧನಂ |
ಚಂದ್ರಕಾಂತಂ ಶಿ (ಸಿ) ತಂ ಜ್ಞೇಯಂ ತದ್ಯಾಮಾದಂಬು ಮುಂಚತಿ || ೧೭೧ ||

ಶುದ್ಧಾದ್ರಶ್ಮಸಂನಿಭಃ ಖ್ಯಾತಃ ಸೂರ್ಯಕಾಂತೊ ವಿಧೀಯತೆ |
ತದ್ಯೋಗಾನ್ಮುಂಚತಿ ಹ್ಯನಿಂ ತಾರಕಾಂತಶ್ಚ ಮುಕ್ತವತ್ || ೧೭೨ ||

ವಜ್ರೊಪಮೋಪ್ಯವೇಧಿಸ್ಯಾತ್ಸಂಗ್ರಹಾದ್ರಸ ಬಂಧನೆ |
ತಥಾ ವರಂ ಮಹಾರತ್ನಂ ಮೃಗನಾಭೀ ಸಿತಂ ತಥಾ || ೧೭೩ ||

ಮಾಥ (ರ) ರಾಂಬುಜಶೂಕಂ ಚ ತಥಾ ಗಕ್ಸುರಜಂ ಪಯಃ |
ನಿ (ನೃ) ಶಾರಂ ಗೌತಮುಕ್ಸುರಂ ತಗರಂ ನಾಗಸಂಜ್ಞಿತಂ || ೧೭೪ ||

ಲಲೀತಕಂ ಸ್ರೋತಜಂ ಚ ಕೃಷ್ಣಾಗರುಶ (ಸಿ) ತಂ ತಥಾ |
ಏತೆ ಜ್ಞಾತ್ವಾ ಗೃಹೀತವ್ಯಾಃ ಸೂತಕಸ್ಯ ನಿಬಂಧನೆ || ೧೭೫ ||

ಮಹೋದಧಿಸಮುದ್ಭೂತಂ ಸೌಗಂಧಿಪಿಂಡಮೇವ ತು |
ಹಿಮಾಚಲ ಸಮಿಪಸ್ಥಾಃ ಪೂರ್ವ ದಕ್ಷಿಣ ಭಾಗತಃ || ೧೭೬ ||

ಚರಂತಿ ಕೃಷ್ಣಸಾರಾಶ್ಚ ಮೃಗಾಸ್ತೇಷಾಂ ಚ ನಾಭಿಗಃ |
ಔಷಧಿ ರಸಪಾಕಸ್ತು ಅತಿಸೌಗಂಧಿಕೊ ಮತಃ || ೧೭೭ ||

ದತ್ವಾ ಕರತಲೆ ನೊ ಗೋಧೂಮಾತ್ವಂಗ್ನಿಸ್ಥೆ ಸಚಲೆ ಭವೇತ್ |
ಸ್ರೋತಾಂ ಜನಿಹಿತೆ ತ್ವಕ್ಪೊಷ್ಣ ದಿವಾನ್ ಸ್ವಕ್ಸಾಣಿ ಪಶ್ಯತಿ || ೧೭೮ ||

ಸಂತತಿಕೃಮದೃಷ್ಟೇನ ಶೇಷಾ ಜ್ಞೇಯಾ ಯಥಾರ್ಥತಃ |
ಉಕ್ತಾಶ್ಚ ವಕ್ತಮಾಣಾಶ್ಚ ಪಾರಂಪರ್ಯೇಣ ಲೋಕತಃ || ೧೭೯ ||

ಸೌವರ್ಚಲಾಚ್ಚ ಲವಣಾದ್ದ್ವಾಲ್ಲೊ (ಲ್ಲೆ) ಲೀತಕಃ ಸ್ಮ(ಸ್ಮೃ)ತಃ |
ಕಂ ನು ಅಚಲೆ............ಜಾಯತೆ ಭಾನುರಶ್ಮಿಲಿಃ || ೧೮೦ ||

ಲವಣಾಃ ಷಟ್‌ಸಮಾಖ್ಯಾತಃ ಸಾಮುದ್ರಂ ಸೈಂಧವಂ ವಿಡಂ |
ಸೌವರ್ಚಲಂ ರೋಮಕಂ ಚ ಚುಲೀಕಾ ಲವಣಂ ತಥಾ || ೧೮೧ ||

ಇಷ್ಟಕಾದಹನೆ ಜಾತ ಪಾಂಡುರಂ ಲವಣಂ ಲಘು |
ತದುಕ್ತ ನವಸೌರಾಖ್ಯಂ ಚುಲಿಕಾ ಲವಣಂ ಚ ತತ್ || ೧೮೨ ||

ಕ್ಷಾರತ್ರಯಂ ಸಮಾಖ್ಯಾತಂ ರಸಸ್ಯ ಜಾರಣೋತ್ತಮಂ |
ವಿಷಾಣಿ (ಣಿ) ಪಂಚಖ್ಯಾತಾನಿ ಶಸ್ತ್ರಾಣಿ ಕೃಷ್ಣಶೃಂಗಿಕಮ್ ॥ ೧೮೩ ॥

ಮುಸ್ತಕಂ ವತ್ಸನಾಭಂ ಚ ಜ್ಞೇಯಂ ಹಾರಿದ್ರ ಸಂಧಾರ್ತಕಃ |
ಕಂದೋತ್ಪಲಸಿಭಾಕಾರಂ ಭಿನ್ನಂ ಕ್ಷೀತಿ ಶಸ್ತ್ರವತ್ ॥ ೧೮೪ ॥

ಘನಂ ಗುರು ಚ ನಿವಿಡಂ ಶೃಂಗಾಕಾರಂ ತು ಶೃಂಗಿಕಂ |
ಮುಸ್ತಕಂ ಮುಸ್ತಕಾಕಾರಂ ಸಿತಂ ಪೀತಂ ತು ದಾರದಂ ॥ ೧೮೫ ॥

ಶುಕ್ಲಂ ಚ ವತ್ಸನಾಭಂ ತು ಕಪಿಲಂ ವತ್ಸನಾಭಕಂ |
ಘನಂ ರೂಕ್ಷಂ ಚ ಕಠಿನಂ ಭಿನ್ನಾಂಜನಸಮಪ್ರಭಮ್ ॥ ೧೮೬ ॥

ಕಂದಾಕಾರಂ ಸಮಾಖ್ಯಾತಂ ಕೃಷ್ಣಮೇತಸ್ಯ ಹಾಪಿಷಮ್ |
ಸುಸ್ನುಹ್ಯರ್ಕಕರವೀರಾಶ್ಚ ಲಾಂಗಲೀವಿಷಮುಷ್ಟಿಕಾ ॥ ೧೮೭ ॥

ಏತೇ ಹ್ಯುಪವಿಷಾಃ ಪಂಚ ತೈಲಾನಿ ಚ ಶೃಣುಷ್ವ ಮೇ |
ಜ್ಯೋತಿಷ್ಮತಂ (ನ್)ರತ್ನಮೂಲಂ ರುಟುಕಾ ರುಷ್ಯ ತಥಾ ॥ ೧೮೮ ॥

ಅಙ್ಕೋಲಜಪಾಲಾಶಂ ವಾಕುಚೀ ತೈಲಮೇವ ಚ |
ಅಪಾಮಾರ್ಗಜಮುನ್ಮತ್ತಂ ರಸಕರ್ಮಣಿ ಯೋಜಯೇತ್ ॥ ೧೮೯ ॥

ಜಾಲೂಕ ಮಾಂಡೂಕವಸಾ ಮತ್ಸ್ಯಕಚ್ಛಪ ಸಂಭವಾ |
ಕರ್ಕಟಃ ಶಿಶುಮಾರಶ್ಚ ಗೋಶೂಕರನರೋದ್ಭವಾಃ ॥ ೧೯೦ ॥

ಖರೋಷ್ಟ್ರಖ್ವಜಮೇಯಾ (ಷಾ) ಶ್ಚ ಮಹಿಷಸ್ಯ ವಸಾ ತಥಾ |
ಮೂತ್ರಾಣಿ ಗಜವಾಜೀನಾ ಖರೋಷ್ಟ್ರಮಹಿಷೇಷ್ವಪಿ ॥ ೧೯೧ ॥

ಗೋಽಜಾವಿಮದ (ನರ) ನಾರೀಣಾಂ ಬೀಜಂ ಪುಷ್ಪಂ ಪಯೋಽಜಜೇತ್ |
ಕ್ಷಾರಾಃ ಕದಲ್ಯಪಾಮಾರ್ಗಪಾಲಾಶೋ ಮೋಕ್ಷಕಸ್ತಥಾ ॥ ೧೯೨ ॥

ತಿಲವಾಸ್ತುಕವರ್ಷಾಭೂರೇರಂಡಶ್ಚ ತಥೈವ ಚ |
ನಿಷ್ಪಾವಚಣಕಕ್ಷಾರೋ ನಿಕುರಃ ಸುರದಾಲಜಃ ॥ ೧೯೩ ॥

ರಕ್ತಮಾಲೋಽರ್ಕೋಽಶ್ವಮಾರಸ್ನುಹ್ಯಸ್ತತ್ರಶ್ಚ ಮುಷ್ಕಕಃ |
ಕುಟಜೋ ದುಮರೀಕ್ಷಾರೋ ನಿಕ್ಷ್ಪರಃ ಕಾರಕಸ್ತಥಾ ॥ ೧೯೪ ॥

ಗೊ (ಗೌ) ತ್ರಮ (ಮೊ) ಗೂಘವೃಕ್ಷಶ್ಚ ಕಂಚುಕೀ ವಜ್ರಕಂದಕಃ |
ತಥಾರಕ್ಷುರಕಃ ಕ್ಷಾರಃ ಕನ್ಯಸಾ ಮಧ್ಯಮೋತ್ತಮಾಃ ॥ ೧೯೫ ॥

ಏತೆ ಪಚೊಪ್ರಸವಾಃ ಕ್ಷಾರಾಃ ರಸಕರ್ಮಣಿ ಯೋಜಯೇತ್ |
ಮೂತ್ರಸ್ತು (ಂತು) ತಾಃ ಸುಶುಷ್ಕಾಸ್ತು ಅಥವಾ ದಧಿವಾರಿಣಾ || ೧೯೬ ||
ತತ್ ಕ್ಷಾರವಾರಿಣಾ ವಾಽಥ ಕ್ಷಾರಾ ಪಚ್ಚೋಪ್ರಸವಾ ಮತಾಃ |
ಯಥಾಲಾಭೇನ ತೆ ಕಾರ್ಯಾಃ ಸಂಚೋಧ್ವಂತು ಯಥಾಗಮಾತ್ || ೧೯೭ ||
ಲವಣಕ್ಷಾರ ಸಂಯುಕ್ತಾ ಯುವಶೂಕಸಮಾಪರಾಃ |
ಸೀತ್ರೈಸ್ತು ಸಂಯುತಾ ಕಾರ್ಯಾಃ ಕಾಕ್ಷೀಕಾಸೀಸಗಂಧಕೈಃ || ೧೯೮ ||
ತ್ರ್ಯೂಷಣೇನ ಸಮಾಯುಕ್ತಾ ಮೃದುನಾ ವಹ್ನಿನಾ ಪಚೇತ್ |
ತೀವ್ರೈ ಭಾರ್ನುಕರೈರ್ವಾಽಥ ಶೋಷಯೇದ್ರಸ ಸಾಧನಂ || ೧೯೯ ||
ದ್ರಾವಕಾಃ ಸರ್ವಲೋಹಾನಾಂ ಮೃದೂನಾಂ ಜಾರಕಾಶ್ಚ ತೆ |
ಸರ್ವಜೋದರಸಂ ಸ್ಥಾನಾಂ ಸರ್ವೇಷಾಂ ಜಾರಕಾಃ ಸ್ಮೃತಾಃ || ೨೦೦ ||
ಗರ್ಭದ್ರುತಿಕರಾ ಹ್ಯೇತೆ ಮರ್ದನಾತ್ಸ್ವೇದತ್ಪಣಾತ್ |
ಸರ್ವಾರ್ಯಾಸೇನ ವಿಧಿವತ್ಕ್ಷಾರಯೋಗಂ ತು ಕಾರಯೇತ್ || ೨೦೧ ||

(ಮುಂದುವರಿಯುವುದು)

"ಸಚಿತ್ರ ಆಯುರ್ವೇದ"ದಿಂದ.

# ಆಂತ್ರಿಕಜ್ವರ ಅಥವಾ ಸಾನ್ನಿಪಾತಿಕಜ್ವರ

## (Entricfever or Typhoid)

ಡಾ। ಯಂ. ಯಸ್. ಪಿ. ಕಮ್ತ್.

ಕಂಕನಾಡಿ – ಮಂಗಳೂರು, ದ. ಕ.

ತ್ರಿದೋಷಗಳಾದ ವಾತ, ಪಿತ್ತ, ಕಫಗಳು ಪ್ರಕೃತ್ಯವನ್ನು ಹೊಂದಿ ಬರುವ ಜ್ವರಕ್ಕೆ ಸಾನ್ನಿಪಾತಿಕ ಜ್ವರವೆಂದು ಹೆಸರು. ಈ ಜ್ವರದಲ್ಲಿ ವಿಷಮಾಕೃತಿಯನ್ನು ಹೊಂದಿದ ಮೂರು ದೋಷಗಳು ಸಾಮ್ಯತೆಗೆ ಬರಬೇಕಾದರೆ ಕನಿಷ್ಠಪಕ್ಷಕ್ಕೆ 3 ವಾರಗಳ ಅವಧಿ ಅಂದರೆ ಸಾಧಾರಣ 21 ದಿವಸಗಳು ಬೇಕು. ಆದುದರಿಂದ ಸಾನ್ನಿಪಾತ ಜ್ವರವು ಸರಿಯಾಗಿ ಚಿಕಿತ್ಸೆ ಮತ್ತು ಅನುಪಾನಗಳನ್ನು ಕೊಟ್ಟಲ್ಲಿ ಆರಂಭವಾದ 21ರಲ್ಲಿ ಶಾಂತ

ತೆಗೆ (Normal) ಬಂದು ಆರೋಗ್ಯ ಉಂಟಾಗುತ್ತದೆ. ಜ್ವರವನ್ನು ಬೇಗನೆ ಇಳಿಸ ಬೇಕೆಂಬ ಅಭಿಲಾಷೆಯಿಂದ ಹೆಚ್ಚು ಹೆಚ್ಚಿನ ಔಷಧಿಗಳನ್ನು ಇಂಜಕ್ಷನ್‍ಗಳನ್ನು ಕೊಡಿ ಸಿ ರೋಗಿಯು ಅದನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ ಜ್ವರವು ಹೆಚ್ಚು ಅವಧಿ ಗಳಿಗೆ ಮುಂದರಿಸಿ ಕೆಲವು ಸಮಯ ಮರಣವನ್ನು ತಂದೊಡ್ಡುತ್ತದೆ ಎಂಬ ಈ ವಿಷ ಯವನ್ನು ಪ್ರತಿಯೊಬ್ಬನು ಅರಿಯತಕ್ಕದ್ದು. ಒಂದು ಕಡೆ ಮಹಾತ್ಮಾಜಿಯವರು ಆಂತ್ರಿಕ ಜ್ವರಕ್ಕೆ ಹೆಚ್ಚಿನ ಮಹತ್ವಕೊಟ್ಟಿದ್ದಾರೆ ಏಕೆಂದರೆ ಕ್ರಮವಂತು ಮಾಡಿದ ಸಾನ್ನಿಪಾತ ಜ್ವರದ ಚಿಕಿತ್ಸೆಯ ಅವಧಿಯಲ್ಲಿ ಕರುಳಿನಲ್ಲಿ ತುಂಬಿದ ದುಷ್ಟಮಲವು ಪೂರ್ಣ ಹೊರಬಂದು ಮನುಷ್ಯನಿಗೆ ಪೂರ್ಣ ಆರೋಗ್ಯವನ್ನು ಕೊಡುತ್ತದೆ. ಆದುದ ರಿಂದ ಆಂತ್ರಿಕ ಜ್ವರದಿಂದ ಶರೀರ ಶುದ್ಧಿಯನ್ನು ಮಾಡಿಕೊಳ್ಳಬಹುದೆಂಬುದು ಅವರ ಅನುಭವ, ಸನ್ನಿಪಾತಿಕ ಜ್ವರಕ್ಕೆ ಔಷಧಿಯಿಂದಲೂ ಅನುಪಾನ ಮುಖ್ಯ.

## —: ಸನ್ನಿಪಾತ ಜ್ವರದ ಲಕ್ಷಣ :—

ಜ್ವರೋ, ದಾಹೋ ಭ್ರಮೋ ಮೋಹೊ, ಹ್ಯತೀಸಾರೊ ವಮಿಸ್ತ್ರಷಾ ।
ಅಸಿದ್ರಾಚ ಮುಖಂರಕ್ತ್ಯಂ ತಾಲುಜಿಹ್ವಾಚ ಶುಷ್ಯತಿ ॥
ಗ್ರೀವಾಯಾಂ ಪರಿದೃಶ್ಯಂತೆ ಸ್ಫೋಟಕ ಸರ್ಷ ಪೋಪಮಾಃ ॥
ಏಭಿಸ್ತು ಲಕ್ಷಣೈರ್ವಿಧ್ಯನ್ಮಂಥರಾಖ್ಯಂ ಜ್ವರಂನೃಣಂ ॥ (ಯೋಗರತ್ನಾಕರ)

ಆಂತ್ರಿಕ ಜ್ವರದಲ್ಲಿ ಪ್ರಧಾನವಾಗಿ ಜ್ವರ, ದಾಹ, ಭ್ರಮೆ ಮತಿ ತಪ್ಪುವಿಕೆ, ಅತಿಸಾರ ಕಾರುವಿಕೆ ತೃಷೆ, ನಿದ್ರೆಯುಲ್ಲದಿರುವಿಕೆ, ಮುಖವು ರಕ್ತವರ್ಣವಾಗುವಿಕೆ ತಾಲು ಮತ್ತು ನಾಲಿಗೆಗಳು ಒಣಗುವಿಕೆ. ಕುತ್ತಿಗೆಯಲ್ಲಿ ಸಾಸಿವೆ ಕಾಳನಂತಹ ಪಿಡಿಕೆಗಳು (Euruptions) ಏಳುವಿಕೆ ಇತ್ಯಾದಿಗಳು ಕಾಣಬರುತ್ತದೆ. ಇದರಲ್ಲಿ ಪಿಡಿಕೆಗಳು ಏಳುವಿಕೆಯು ಹೆಚ್ಚಾಗಿಯೂ 7ನೇ ದಿವಸದ ನಂತ್ರಕಾಣಬರುತ್ತದೆ. ಆ ಮೇಲೆ ಅದು ಕ್ರಮೇಣ ಕುತ್ತಿಗೆಯಿಂದ ಕೆಳಗೆ ಹೋಗುತ್ತಾ 2ನೇ ವಾರದ ಅಂತ್ಯ ದಲ್ಲಿ ತೊಡೆಗಳ ಕೆಳಭಾಗದಲ್ಲಿ ಕಂಡು ಬಂದು ಮತ್ತು ತನ್ನಷ್ಟಕ್ಕೆ ಮಾಯುವಾಗು ತ್ತವೆ. ಈ ಸನ್ನಿಪಾತ ಜ್ವರವು ಕೆಲವು ಸಲ ಕ್ರಿಮಿಗಳಿಂದಲೂ, ಸಂಭವಿಸುತ್ತದೆ. ಕುಡಿಯುವ ಹಾಲು ಮತ್ತು ಇತರ ಪಾನೀಯಗಳಲ್ಲಿ ಈ ಕ್ರಿಮಿಗಳು ಸೇರಿ ಸಣ್ಣ ಕರುಳು ವಾ ದೊಡ್ಡ ಕರುಳಿನಲ್ಲಿ ಸೇರಿಕೊಂಡು ಆಂತ್ರಿಕ (ಕರುಳಿನ) ಜ್ವರವನ್ನು ಉಂಟುಮಾಡುತ್ತದೆ. ಕೆಲವುಸಲ ಕರುಳಿನಲ್ಲಿ ಛಿದ್ರ ಬೀಳುವುದೂ ಇದೆ. ಕರುಳಿನಲ್ಲಿ ಛಿದ್ರ ಬಿದ್ದರೆ ಚಿಕಿತ್ಸಿಸಲು ಕಷ್ಟ ಸಾಧ್ಯವಾಗಿದೆ.

ತ್ತದೆ. ಮತ್ತು ಪುನಃ ರಾತ್ರೆ ಏರುತ್ತದೆ. ಜ್ವರಕ್ಕೆ ಸ್ಥಿರತೆ ಇರುವುದಿಲ್ಲ ಒಂದೊಂದು ಸಲ 102°.101°.103°-104°ರ ವರೆಗೆ ವರೆಗೂ ಕಾಣುತ್ತದೆ. ಜ್ವರವು ಅಧಿಕವಾಗಿರುವಾಗ ಬಾಯಾರುವಿಕೆಯೂ ಪುಪ್ಪಸದಲ್ಲಿಯೂ ಶ್ವಾಸನಾಡಿಗಳಲ್ಲಿಯೂ ತ್ರಿದೋಷಗಳ ವಿಷಮತೆಯಿಂದ ಕೆಂಪುಕೆಂಪಾಗಿ ಬಿಶಿಬಿಶಿಯಾದ ಶ್ವಾಸಗಳೂ ಹೊರಬರುತ್ತದೆ. ಅಲ್ಲದೆ ಶ್ವಾಸಗಳ ಶಬ್ಧವು ಉರ್ಧ್ವ ಶ್ವಾಸದಂತೆ ಕೇಳಬರುತ್ತದೆ. ಈ 2ನೇ ವಾರದಲ್ಲಿ ರೋಗಿಯನ್ನು ಆಗಾಗ್ಗೆ ನೋಡಿ ಅತೀ ಜಾಗ್ರತೆಯಿಂದ ಅನುಪಾನ ಔಷಧವನ್ನು ಕೊಟ್ಟು ಎಣ್ಣೆ ಇಲ್ಲದೆ ನೊಂದಿಹೋಗುವ ದೀಪವನ್ನು ಎಣ್ಣೆ ಹಾಕಿ ಉರಿಸಿಕೊಂಡು ಬಂದಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು ಕೆಲವುವೇಳೆ ರೋಗಿಯ ರಕ್ಷಕರು ಈ ವಾರದಲ್ಲಿ ಜ್ವರವು ಪ್ರಬಲಾವಸ್ಥೆಯಲ್ಲಿ ಇರುವುದನ್ನು ನೋಡಿ ಬೇರೆ ಬೇರೆ ಡಾಕ್ಟರು ವಾ ವೈದ್ಯರಲ್ಲಿಗೆ ಹೋಗಿ ನ್ಯಾಯವಾಗಿ ಶಮನಕ್ಕೆ ಬರುವ ರೋಗವನ್ನು ವಿಷಮಾವಸ್ಥೆಗೆ ತರಿಸಿ ಕಷ್ಟಪಡುವುದೂ ಉಂಟು.

---

## 3ನೇ ವಾರದಲ್ಲಿ ಜ್ವರದ ಲಕ್ಷಣ.

3ನೇ ವಾರದಲ್ಲಿ ದೋಷಗಳು ಸಾಮ್ಯಕ್ಕೆ ಬರಲು ಆರಂಭವಾಗುವುವು. ಜ್ವರದ ಪ್ರಕೋಪವು ಕಮ್ಮಿಯಾಗುತ್ತಾ ಬರುವುದು. ಆ ಮೊದಲು ಹೇಳಿದ ಎಲ್ಲಾ ಉಪದ್ರವಗಳು ಕಾಣಿಸಲ್ಪಡುವುದಿಲ್ಲ. ಬೆಳಗ್ಗಿನ ಜಾವದಲ್ಲಿ 100 ಡಿಗ್ರಿ ಮಧ್ಯಾಹ್ನ ಸಂಜೆಗೆ 101 ಡಿಗ್ರಿ ವರೆಗೆ ಏರುತ್ತದೆ. ಈ ಪ್ರಕಾರ 21ನೇ ದಿವಸದಲ್ಲಿ ಜ್ವರವು ಮುಂದೆ ಮುಂದೆ ಹೋದಂತೆ ಹಿಂದೆ ಹಿಂದೆ ಬಂದು ಸ್ವಾಸ್ಥ್ಯದಲ್ಲಿ ನಿಲ್ಲುತ್ತದೆ. ಆದರೆ ರೋಗಿಯು ಜ್ವರವು ಬಿಡುವ ಸಮಯದಲ್ಲಿ ಅತಿ ದುರ್ಬಲನಾಗಿ ಕ್ಷೀಣನಾಗುತ್ತಾನೆ. 2ನೇ ವಾರದಲ್ಲಿದ್ದ ಅತಿಸಾರ ರಕ್ತಾತಿಸಾರ ಜ್ವರ ಕ್ರಮವಾಗಿ ಕಮ್ಮಿ ಆಗುತ್ತದೆ. ಕೆಲವು ವೇಳೆ ರೋಗಿಗೆ ಸರಿಯಾದ ಚಿಕಿತ್ಸೆ ಅನುಪಾನಗಳು ಆಗದೇ ಇದ್ದು ಅಲ್ಲದೇ ರೋಗಿಗೆ ಬೇಗನೆ ಜ್ವರ ಬಿಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಅತ್ಯೌಷಧ ಸೇವನೆಯಿಂದಾಗಿಯೂ ಮೇಲಿನ ಉಪದ್ರವಗಳು ಜಾಸ್ತಿಯಾಗಿ ಜ್ವರವು 104 105 ಡಿಗ್ರಿಗಳ ವರೆಗೆ ಏರುತ್ತಾ ಹೋಗಿ ಕರುಳಿನಿಂದ ಹೆಪ್ಪಾದ ರಕ್ತವೂ ಹೋಗಿ ಕರುಳು ಛಿದ್ರ ಬಿದ್ದು [illegible] ಮೃತ್ಯುವನ್ನು ಹೊಂದುವುದೂ ಉಂಟು.

## ನಾಲ್ಕನೇ ವಾರದಲ್ಲಿ ಲಕ್ಷಣಗಳು.

ನಾಲ್ಕನೇ ವಾರದಲ್ಲಿ ಜ್ವರ ಅತಿಸಾರಗಳು ಸಂಪೂರ್ಣ ನಿಲ್ಲುವುವು. ನಾಲಿಗೆಯು ಸ್ವಚ್ಛವಾಗಿ ನ್ಯಾಯವಾದ ಹಸಿವು ಉಂಟಾಗುತ್ತದೆ. ರೋಗಿಯು ತನ್ನ ಮುಂಚಿನ ನಿರೋಗಾವಸ್ಥೆಯನ್ನು ಹೊಂದುತ್ತಾ ಬರುತ್ತಾನೆ. ಕ್ರಮೇಣ ಆರೋಗ್ಯವನ್ನು ಹೊಂದುತ್ತಾನೆ. ಈ ರೀತಿ ನಾಲ್ಕನೇ ವಾರದಲ್ಲಿ ರೋಗಿಯು ಆರೋಗ್ಯವನ್ನು ಹೊಂದುತ್ತಿರುವಾಗ ಅನುಪಾನ ವ್ಯತ್ಯಾಸದಿಂದ ಪುನಃ ಜ್ವರ ಬರುವ ಸಂಭವವಿದೆ. ಇದನ್ನು ಬಹಳ ಜಾಗ್ರತೆಯಿಂದ ನೋಡಿಕೊಳ್ಳಬೇಕು. ಹಾಗೆ ಪ್ರಾಪ್ತ ಕ್ರಮಣವಾದ ಜ್ವರಕ್ಕೆ "ಪುನರಾವರ್ತಕ" ಎಂದು ಹೇಳುತ್ತಾರೆ. ಹೀಗೆ 2ನೇ ಸಲ ಆರಂಭಿಸಿದ ಜ್ವರವು 40-50 ದಿವಸಗಳ ವರೆಗೂ ಬಂದು ಶರೀರವು ಬಹಳ ಕ್ಷೀಣಾವಸ್ಥೆಯನ್ನು ಹೊಂದುತ್ತದೆ. ಹಾಗೆ ಬಂದ ಸನ್ನಿಪಾತಿಕ ಜ್ವರದವನನ್ನು ತನ್ನ ಪೂರ್ವ ಸ್ಥಿತಿಗೆ ತರಬೇಕಾದರೆ 3 ತಿಂಗಳು ವರೆಗೆ ಕಾಯಬೇಕಾಗುತ್ತದೆ. ಹಾಗೆ ಮುಕ್ಕಳಿಸಿ ಬಂದ ಜ್ವರದಿಂದ ಕೆಲವು ಸಲ ಕಿವುಡುತನ, ನರಗಳ ದೌರ್ಬಲ್ಯದಿಂದ ಮುಖತಿರುಗುವಿಕೆ ಕೈಕಾಲು ಬಾರದಿರುವಿಕೆ ಇತ್ಯಾದಿ ರೋಗಿಯು ಅಂತ್ಯದ ವರೆಗೂ ಉಳಿಯುವ ಕಾಯಿಲೆಗಳು ರೋಗಿಯನ್ನು ಹಿಡಿದುಕೊಳ್ಳುವುವು. ಇದಕ್ಕೆ ಕಾರಣವೇನೆಂದರೆ ದೀರ್ಘ ಕಾಲದ ವರೆಗೆ ಕಠಿಣತರದ ಮದ್ದುಗಳನ್ನು ರೋಗಿಯು

ಬಲಾಬಲವನ್ನು ತಿಳಿದುಕೊಳ್ಳದೆ ಸೇವಿಸಲು ಕೊಡುವುದರಿಂದಲೆ ಮೇಲೆ ಹೇಳಿದ ದೀರ್ಘ ಕಾಲದ ಕಾಯಿಲೆಗಳು ಬರುತ್ತವೆ ಎಂದು ಪ್ರತೀಯೊಬ್ಬನೂ ತಿಳಿಯಬೇಕು (ಇ)

ಸನ್ನಿಪಾತ ಜ್ವರದಲ್ಲಿ ಕೆಲವು ವೇಳೆ 2ನೇ ವಾರದಲ್ಲಿ ಅತಿಸಾರ ಉಂಟಾಗದೆ ಮಲಬದ್ಧತೆಯೇ ಇರುತ್ತದೆ. ಹಾಗಿದ್ದ ಪಕ್ಷದಲ್ಲಿ ವಿಷಮಜ್ವರವೂ ಇದರೊಂದಿಗೆ ಸೇರಿರುತ್ತದೆ ಎಂದು ತಿಳಿಯಬೇಕು. ಅಂತಹ ಸಂದರ್ಭದಲ್ಲಿ ರೋಗಿಗೆ ಎನಿಮಾ ಮೂಲಕ ಶೋಧನೆ ಮಾಡಿಸಬೇಕು.

(ಸಶೇಷ)

---

## :: ನಾಯಿಕೊಡೆಯ ಜಾತಿಯ ಗಿಡಗಳು ::

ಲೇಖಕ:- M.S. ನಾಗೇಶರಾವ್, L. Ag., L. A. M. S.,

ವೃಕ್ಷಾದೀನಾಮಪಿ ಚೇತನತ್ವಂ ಬೋದ್ಧವ್ಯಂ ...... ತಥಾ
ಲವಲೀ ಮೇಘಸ್ತನಿತ ಶ್ರವಣಾತ್ಫಲವತೀ ಭವತಿ ॥

ಚ. ಸೂ. ಅ. ೧. ಚಕ್ರಪಾಣಿದತ್ತ ಟೀಕಾ.

ನಾಯಿಕೊಡೆಯ ಜಾತಿಯ ಗಿಡಗಳನ್ನು ನಮ್ಮ ಪೂರ್ವಜರು ಉದ್ಭಿಜ್ಜ ವರ್ಗಕ್ಕೆ ಸೇರಿಸಿದ್ದಾರೆ. ಭಾನೂಜೀದೀಕ್ಷಿತರೂ ಕೂಡ ತಮ್ಮ ಅಮರ ಕೋಶ ವ್ಯಾಖ್ಯಾನದಲ್ಲಿ ಛತ್ರಕಾದಿಗಳನ್ನು ಶಾಕವರ್ಗಕ್ಕೆ ಸೇರಿಸಿರುತ್ತಾರೆ.

ಆದರೆ ಈ ಚತ್ರಕಾದಿಗಳ ಉತ್ಪತ್ತಿಕ್ರಮವು ಹೇಗೆ ಎಂದು ನಾವು ತಿಳಿಯಬೇಕಾಗಿದೆ.

ಪಾದಪಜಾತಯಃ |
ಬೀಜಾತ್ಕಾಣ್ಡಾತ್ತಥಾ ಕನ್ದಾತ್ತಜ್ಜನ್ಮ ತ್ರಿವಿಧಂ ವಿದುಃ ॥

ಉಪವನವಿನೋದಃ

ಪತ್ರಂ ಪುಷ್ಪಂ ........ ಕಂಧಂ ಸಂಸ್ವೇದಜಂ ತಥಾ |
ಶಾಕಂ ಷಡ್ವಿಧಮುದ್ದಿಷ್ಟಂ ........ ॥

ದ್ರವ್ಯಗುಣಸಂಗ್ರಹಃ

ಸಂಸ್ವೇದಜಮಿತಿ ಛತ್ರಕಾದಿ ॥

ಶಿವದಾಸಸೇನಕೃತಟೀಕಾ.

ಸಸ್ಯಗಳು ಬೀಜ, ಕಾಣ್ಡ, ಇಲ್ಲವೇ ಕನ್ದದಿಂದ ಹುಟ್ಟುತ್ತವೆ ಎಂಬುದು ಉಪವನವಿನೋದಕಾರರ ಮತವು. ಆದರೆ ಛತ್ರಕಾದಿಗಳು ಸಂಸ್ವೇದಜಗಳೆಂದು

ಚಕ್ರಪಾಣಿದತ್ತರು ತಮ್ಮ ದ್ರವ್ಯಗುಣಸಂಗ್ರಹದಲ್ಲಿ ಹೇಳಿದ್ದಾರೆ. ಅಂದಮೇಲೆ ಸಸ್ಯಗಳು ಜೀವರಿಂದಲೂ ಹುಟ್ಟುತ್ತವೆ ಎಂಬುದು ಸಿದ್ಧವಾದಂತಾಯಿತು. ಈ ಛತ್ರಕ ಅರ್ಥಾತ್ ನಾಯಿಕೊಡೆಗಳು ಜೀವರಿಂದ ಹುಟ್ಟುತ್ತವೆ ಎಂಬುದಕ್ಕೆ ಶಾಸ್ತ್ರದ ಹಿನ್ನೆಲೆ ಇದ್ದರೆ ಅದನ್ನು ವಿದ್ವಾನ್ ವಾಚಕರು ಪ್ರಕಟಿಸಬಹುದು.

# ವಾರ್ತಾವಿಹಾರ:—

ಆಂಧ್ರ, ತಮಿಳು ನಾಡು, ಉತ್ತರ ಹಿಂದುಸ್ತಾನದಿಂದ ಬೆಂಗಳೂರಿನಲ್ಲಿ ನಡೆಯಲಿರುವ ಆಯುರ್ವೇದ ಮಹಾಸಮ್ಮೇಳನಗಳಿಗೆ ಸ್ಪೆಶಲ್ ರೈಲು, ಬಸ್ಸು ಇತ್ಯಾದಿಗಳಲ್ಲಿ ಆಯುರ್ವೇದೀಯರು ತಂಡೋಪ ತಂಡಗಳಾಗಿ ಸಾವಿರಗಟ್ಟಲೆ ಬರಲಿರುವರಂತೆ. ಕನ್ನಡ ನಾಡಿನ ಪ್ರತೀ ಜಿಲ್ಲೆಗಳಿಂದಲೂ ವೈದ್ಯರ "ಜಾತಾ"ಗಳನ್ನು ಈಗಾಗಲೇ ಹೊರಟಿರುವವು.

ದಕ್ಷಿಣ ಕನ್ನಡ ಜಿಲ್ಲೆಯಿಂದ ವೈದ್ಯರಾಜ ಪಾಂಗಾಳ ಲಕ್ಷ್ಮೀನಾರಾಯಣ ನಾಯಕರ ಮುಖಂಡತ್ವದಲ್ಲಿ ವೈದ್ಯ ಟಿ. ಎಸ್. ಕೇಳು ನಂಬಿಯಾರ್, ಪಂಡಿತ ಕೆ. ವಿ. ಜ್ಯೋಶಿ, ಆಯುರ್ವೇದ, ಶಿರೋಮಣಿ, ವೈದ್ಯ ಟಿ. ರಾಮದಾಸ ಶೆಣೈ ಮುಂತಾದ ವೈದ್ಯ ಮುಖಂಡರೂ "ಪೋಸೋ ಪಥಿ"ಯ ಸ. ಭ. ರವರು, ವಾಯುವಿನಿಂದ ಸಕಲರೋಗಗಳನ್ನೂ ಚಿಕಿತ್ಸಿಸಬಹುದೆಂದೂ ರೋಗಿಗೆ ಬರುವ ರೋಗವು 15 ದಿನ ಮುಂದಾಗಿ ತಿಳಿಯುವುದೆಂದೂ ಅದನ್ನು ಆಹಾರಾದಿ ಅನುಪಾನಗಳಿಂದ ತಡೆಗಟ್ಟಬಹುದೆಂದೂ ವಾದಿಸುವ ಶ್ರೀ ಅ. ನ. ಘಡಿಯಾರರೂ ಈ "ಜಾತಾ"ದೊಡನಿದ್ದು, ಇವರು ಸ್ಪೆಶಲ್ ಬಸ್ಸಿನಲ್ಲಿ ಹೊರಟು ಹಾಸನ ಮಾರ್ಗವಾಗಿ ಬೆಂಗಳೂರು ಸಮ್ಮೇಳ ಮುಗಿಸಿ ಪರತು ಮೈಸೂರು ಮಾರ್ಗವಾಗಿ ಮರಳುವ ಕಾರ್ಯಕ್ರಮ ಇಟ್ಟುಕೊಂಡಿರುವರು. ಇವರು ದಾರಿಯಲ್ಲೆಲ್ಲಾ ಆಯುರ್ವೇದದ ಪ್ರಚಾರ ಮಾಡುತ್ತ ಹೋಗಲಿರುವರಾಗಿಯೂ ತಿಳಿಯುತ್ತೆ.

—o— —o— —o—

ಬೆಂಗಳೂರಲ್ಲಿ ಜೂನ್ ಪ್ರಥಮ ವಾರ ಕೂಡಲಿರುವ ಆಯುರ್ವೇದ ಮಹಾ ಸಮ್ಮೇಳನಗಳು ತಾ 12ರಂದು ಪ್ರಾರಂಭವಾಗಿ ತಾ 14ರಂದು ಕರ್ನಾಟಕ ಪ್ರಾದೇಶಿಕ ಮಂಡಳದ ಸಮ್ಮೇಳ ಮತ್ತು 15, 16, 17 ಈ ಮೂರು ದಿನ ಅಖಿಲ ಭಾರತ ಮಹಾಸಮ್ಮೇಳನಗಳೆಂದು ನಿಶ್ಚಯಿಸಿರುವರು.

ಕ. ಪ್ರಾದೇಶಿಕ ಆ. ಮಂಡಳಕ್ಕೆ ಆಯುರ್ವೇದ ವಿದ್ವಾನ್ ಗುಂಡಾಚಾರ್ಯ

ಭೀಮಾಚಾರ್ಯ, ಸವಣೂರು ಎಲ್, ಎ., ಎಂ. ಎಸ್. ಇವರು ಅಧ್ಯಕ್ಷರಾಗಿ ಸರ್ವಾನುಮತದಿಂದ ಆರಿಸಿ ಬಂದಿರುವರು.

ಈ ಸಮ್ಮೇಳನಗಳಲ್ಲಿ ವೈದ್ಯರ, ವೈದ್ಯ ಸಂಘಗಳ ಹಾಗೂ ಮಂಡಳಗಳ ಏಕ ಘಟಕವಾಗಬೇಕೆಂಬ ಗೊತ್ತುವಳಿಯು ಬರುವಂತೆ ಹೆಚ್ಚಿನ ವೈದ್ಯರು ತುಂಬಾ ಉತ್ಸುಕರಾಗಿರುವರೆಂದು ತಿಳಿದು ಬರುತ್ತದೆ

---

# ಸಂಪಾದಕೀಯ

## ಕ. ಪ್ರಾ. ಆ. ಮಂಡಳದ ಅಧ್ಯಕ್ಷ ವೈದ್ಯ ಗುಂಡಾಚಾರ್ಯ ಸವಣೂರರಿಗೆ ಸ್ವಾಗತ.

ತಾ. 14-6-57ರಂದು ಬೆಂಗಳೂರಲ್ಲಿ ನಡೆಯಲಿರುವ ಕರ್ಣಾಟಕ ಪ್ರಾದೇಶಿಕ ಆಯುರ್ವೇದ ಮಂಡಳದ ಅಧ್ಯಕ್ಷರಾಗಿ ಸರ್ವಾನುಮತದಿಂದ ಆರಿಸಿ ಬಂದಿರುವ ಆಯುರ್ವೇದ ವಿದ್ವಾನ್ ಗುಂಡಾಚಾರ್ಯ ಬೀಮಾಚಾರ್ಯ ಸವಣೂರು ಎಲ್. ಎಮ್. ಎಸ್. ಹುಬ್ಬಳ್ಳಿ ಇವರಿಗೆ ಆಯುರ್ವೇದವು ಸಂತೋಷದಿಂದ ಸ್ವಾಗತ ಬಯಸುವದು.

ಇವರು ಕನ್ನಡ "ಆರೋಗ್ಯ ಮಂದಿರ"ವೆಂಬ ಮಾಸ ಪತ್ರಿಕೆಗೆ ಸಂಪಾದಕರಾಗಿದ್ದಾಗ ಆಯುರ್ವೇದಕ್ಕೆ ಸಲ್ಲಿಸಿದ ಸೇವೆಯು ಚಿರಸ್ಮರಣೀಯವಾಗಿದೆ. ಹಾಗೂ ಇವರು ಬರೆದ ಪುಸ್ತಕಗಳಲ್ಲಿ "ತ್ರಿದೋಷ ವಿಜ್ಞಾನ"ವೆಂಬ ಪುಸ್ತಕವಂತೂ ಕೈದೀವಟಿಗೆಯಂತಿದೆ. ಹುಬ್ಬಳ್ಳಿಯ ಶ್ರೀ ಆಯುರ್ವೇದ ವಿದ್ಯಾಲಯದಲ್ಲಿ ಪಾಠವನ್ನು ಹೇಳಿಕೊಡುತ್ತಿರುವದರ ಜತೆ ಅಲ್ಲಿಯ ವೈದ್ಯ ಸಂಘದ ಚಟುವಟಿಕೆಗಳಲ್ಲಿ ಪ್ರಧಾನ ಪಾತ್ರ ವಹಿಸಿ ಎಲ್ಲರ ಪ್ರೀತಿಗೂ ಆದರಕ್ಕೂ ಪಾತ್ರರಾಗಿದ್ದುದರಿಂದಲೇ ಇವರ ಹೆಸರು ಸರ್ವಾನುಮತದಿಂದ ಆರಿಸಿ ಬಂದು ಅಧ್ಯಕ್ಷರಾಗಿರುವರು.

ಇವರು ತುಂಬಾ ಸರಳ ಜೀವಿಗಳು. ಆಯುರ್ವೇದೀಯ ಅಭಿವೃದ್ಧಿಯ ಕುರಿತು ಯಾವ ತ್ಯಾಗಕ್ಕೂ ಸಿದ್ಧರಿರುವರು. ಪೌರಾತ್ಯ ಮತ್ತು ಪಾಶ್ಚಾತ್ಯ ವೈದ್ಯ ಪದ್ಧತಿಗಳೆರಡನ್ನು ಕಲಿತವರು. ಆಯುರ್ವೇದವೇ ತನ್ನ ಜೀವಾಳವನ್ನಾಗಿ ಅಭ್ಯಾಸ ಮಾಡುತ್ತಿರುವರು. ಕನ್ನಡ ನಾಡಿನಲ್ಲಿ ಆಯುರ್ವೇದದ ಅಭಿವೃದ್ಧಿಗಾಗಿ ಹಗಲಿರುಳೆನ್ನದೆ ದುಡಿಯುವ ಇವರೂ ಒಬ್ಬರು

ಇವರು ಈ ವರ್ಷ ಕ. ಪ್ರಾ. ಆ. ಮಂಡಳದ ಅಧ್ಯಕ್ಷರಾಗಿ ಆರಿಸಿ ಬಂದುದು ಕನ್ನಡ ನಾಡಿನ ಆಯುರ್ವೇದೀಯರಿಗಿರುವ ತೊಂದರೆಗಳನ್ನು ದೂರೀಕರಿಸುವುದಕ್ಕಾಗಿ ತುಂಬಾ ಸಹಾಯಕವಾಗಬಹುದೆಂದು ನಂಬಿದ್ದೇವೆ

ವೈದ್ಯ ಗುಂಡಾಚಾರ್ಯ ಸವಣೂರರ ಈ ಅಧ್ಯಕ್ಷತನದ ಅವಧಿಯು ಕೀರ್ತಿಯುತವಾಗಿ ನೆರವೇರುವಂತಾಗಲೆಂದು ಹಾರೈಸುತ್ತೇವೆ.

---

## ಕೃಷ್ಣಾ ಆಯುರ್ವೇದಿಕ ಔಷಧಾಲಯಕ್ಕೆ ಮುತ್ತಿಗೆ.

### ಬತ್ತೀಸ ಮಸಾಲೆಯ ೨೫೦ ಬಾಟ್ಲಿ ಜಪ್ತಿ.

(ಸ್ವಂತ ಸುದ್ದಿಗಾರರಿಂದ)

ಬೆಳಗಾವಿ ೨೯– ನಗರದ ಪೋಲೀಸರು ತಾ. ೨೭ ಸಾಯಂಕಾಲ ನಗರದ ಮಧ್ಯದಲ್ಲಿಯ ಬೋಗಾರವೇಸದಲ್ಲಿ ಪಾರ್ಕ ಅಡ್ಡೆಯಲ್ಲಿರುವ ಕೃಷ್ಣಾ ಆಯುರ್ವೇದಿಕ ಔಷಧಾಲಯಕ್ಕೆ ಮುತ್ತಿಗೆ ಹಾಕಿ ಅಲ್ಲಿ ಸಿಕ್ಕ ೭ ಪೀಪಿನಷ್ಟು ಸುಮಾರು ೨೫೦ ಬಾಟ್ಲಿ ಮಾದಕ ಪೇಯವಾದ ಪತ್ರಾಟಂಗಾಸವ ರಸಾಯನವನ್ನು ಜಪ್ತ ಮಾಡಿದರು. ಇದಲ್ಲದೆ ಇತರ ಮಾದಕ ಪದಾರ್ಥ ತಯಾರಕ ವಸ್ತುಗಳನ್ನು ವಶಪಡಿಸಿಕೊಂಡರು. ಈ ರಸಾಯನವೇ ಬತ್ತೀಸ ಮಸಾಲೆಯೆಂದು ಸಂಬೋಧಿಸಲ್ಪಡುತ್ತಿದ್ದು ಮುಂದಿನ ತಪಾಸಣೆ ನಡೆದಿದೆ.

(ಸಂಯುಕ್ತ ಕರ್ನಾಟಕದಿಂದ)

# ಸಾದರ ಸ್ವೀಕಾರ

## —: ಕನ್ನಡ ಋಗ್ವೇದ ಸಂಹಿತೆ :—

ಸಂಪಾದಕರು:- ಪ್ರೋ. ಬಿ.ಎಸ್. ಪೈ. ಅನುವಾದಕರು:- ಶ್ರೀ ಲಕ್ಷ್ಮಣ ಬಾಬಣ ಪೈ. ಪ್ರಕಾಶಕರು:- ಲಕ್ಷ್ಮಣ ಬಾಬಣ ಪೈ, ಮೆಮೋರಿಯಲ್ ಪಬ್ಲಿಕೇಶನ್ಸ್, ಘೋಡಕೆ ಬಿಲ್ಡಿಂಗ್, ಜಯಚಾಮರಾಜನಗರ, ಹುಬ್ಬಳ್ಳಿ. ಸಂಪುಟ ೧, ಭಾಗ ೧. ಡೆಮ್ಮಿ ಆಕ್ಟೋವ್ ಸುಮಾರು ೧೭೬ ಪುಟಗಳಿಗಿಂತಲೂ ಹೆಚ್ಚಿಗಿದೆ.

ಬೆಲೆ ಕೇವಲ **ರೂ. 5 ಮಾತ್ರ.**

ವಿಮರ್ಶೆ ಮುಂದಿನ ಸಂಚಿಕೆಯಲ್ಲಿ.

---

## ಆಯುರ್ವೇದ ಸಮಸ್ಯೆಯ ಕುರಿತು

## ಪ್ರಶ್ನೋತ್ತರ ಮಾಲಿಕೆ.

ರಚಿಸಿ ಪ್ರಕಾಶಿಸಿದವರು:- ಆಯುರ್ವೇದ ಭೂಷಣ ಮತ್ತು ವಿಶಾರದ ಡಾ|| ಐ. ಕೆ. ಪಿ. ಶರ್ಮ, ಎ. ಎಂ. ಎ. ಸಿ. ಮಂಗಳೂರು—3.

ಆಯುರ್ವೇದವು ಹಳತು, ಆಧುನಿಕ ಪದ್ಧತಿ ಮತ್ತು ನಾಗರಿಕತೆಯ ಮುಂದ ದೀಗ ಅನುಪಯುಕ್ತ. ನಿಷ್ಪ್ರಯೋಜಕವೆಂಬಿತ್ಯಾದಿ ಪ್ರಶ್ನೆಗಳನ್ನೂ ರಚಿಸಿ ಚನ್ನಾದ ರೀತಿಯಲ್ಲಿ ಆಯುರ್ವೇದವು ಈಗಲೂ ಉಪಯುಕ್ತವೂ ಪ್ರಯೋಜನಕಾರಿಯೂ ಎಂಬುದನ್ನು ಚನ್ನಾಗಿ ಮನದಟ್ಟಾಗುವಂತೆ ಉತ್ತರ ರೂಪದಲ್ಲಿ ವಿವರಿಸಿರುವರು. ಸಂಗ್ರಾಹ್ಯಯೋಗ್ಯ ಪುಸ್ತಕ ಕ್ರೌನ್ 1/8 ಆಕಾರ 14 ಪುಟಗಳ ಹೊತ್ತಿಗೆ.

ಬೆಲೆ ಕೇವಲ **0-1-0** (ಈಗಿನ ಆರು ನಯಾ ಪೈಸೆ)

---

# 'ಆಯುರ್ವೇದ ಟ್ರಸ್ಟ್'.

ಯಾ

## ಆಯುರ್ವೇದ ವಿಶ್ವಸ್ಥ ಸಂಸ್ಥೆ

ಆಯುರ್ವೇದದ ಉನ್ನತಿಯು ಹಲವಾರು ವಿಚಾರಗಳಿಂದೊಡಗೂಡಿದೆ. ಅವರಲ್ಲೂ ಪ್ರಥಮವಾಗಿ "ಆಯುರ್ವೇದ ಮುದ್ರಣ ಮತ್ತು ಪ್ರಕಾಶನ ಮಂದಿರ" ಎಂಬೊಂದು ಶಾಖೆಯನ್ನು ಕಲ್ಪಿಸಿದ ಪ್ರಾರಂಭಿಸುವ ಉದ್ದೇಶದಿಂದ "ಆಯುರ್ವೇದ ಟ್ರಸ್ಟ" ಯಾ ವಿಶ್ವಸಂಸ್ಥೆ ಎಂಬ ಹೆಸರಿನಲ್ಲಿ ಒಂದು ವಿಶ್ವಸ್ಥ ಸಮಿತಿಯನ್ನು ರಚಿಸಲು ನಿಶ್ಚಯಿಸಿರುವೆವು. ಇದಕ್ಕೆ ವೈದ್ಯ ಗ. ನಿ. ಪಟವರ್ಧನರಂಥ ವೈದ್ಯಗಣ್ಯರು ನೆರವಾಗಿ ದುಡಿಯುತ್ತಿದ್ದು ಸದ್ರಿ ವಿಶ್ವಸ್ಥ ಸಮಿತಿಯನ್ನು ನಿಯಮಿಸಬೇಕಿದ್ದರೆ ವಿಶ್ವಸ್ಥ ನಿಧಿ ನೆರೆಸಲು ಕೂಡ ಬೇಕಾಗಿದೆ.

ಇದಕ್ಕಾಗಿ ವೈದ್ಯ ಬಾಂಧವರು ಕೊಡುಗೈ ದೊರೆಗಳಾಗಿ ಮುಂದೆ ಬಂದು ಸಹಕರಿಸುವಂತೆ ಪ್ರಾರ್ಥಿಸುವೆವು. ಮತ್ತು ರೂಪಾಯಿ ಒಂದನೂರಕ್ಕೆ ಕಡಿಮೆಯಿಲ್ಲದಂತೆ ಕೊಟ್ಟವರನ್ನು ಆಜೀವ ಸದಸ್ಯರೆಂದು ಪರಿಗಣಿಸಲಾಗುವುದು.

ಆಯುರ್ವೇದದ ಉದ್ಧಾರಕ್ಕಾಗಿ ದುಡಿಯುವ ಈ ಸಂಸ್ಥೆಯು ಅರ್ಥಿಕಾದಿ ಸಕಲ ರೀತಿಯ ಸಹಾಯ ದಾನಗಳನ್ನು ಪಡೆಯುವುದು. ದಾನಿಗಳು ಮುಂದೆ ಬಂದಷ್ಟು ಬೇಗ ಸದ್ರಿ ವಿಶ್ವಸ್ಥ ಸಮಿತಿಯು ರಚನೆಗೊಳ್ಳುವುದು.

ರೂಪಾಯಿ ಒಂದನೂರಕ್ಕಿಂತ ಹೆಚ್ಚಿಗೆ ಹಣಕೊಟ್ಟವರ ಸಚಿತ್ರ ಪರಿಚಯವನ್ನು "ಆಯುರ್ವೇದ" ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ನಿಧಿ ಇತ್ಯಾದಿ ಸಹಾಯ ಕಳುಹಿಸುವವರು ಈ ಕೆಳಗಿನ ವಿಳಾಸಗಳಿಗೆ ಕಳುಹಿಸಿರಿ:—

'ಆಯುರ್ವೇದ'

ಕಾರ್ಯಾಲಯ] [ಕಾರ್ಕಳ, ದ. ಕ.

**ವೈದ್ಯ ಗ. ನಿ. ಪಟವರ್ಧನ**

ಆಯುರ್ವೇದ ತೀರ್ಥ, ಸಿರ್ಸಿ, ಉ. ಕನ್ನಡ.

**ಮೆಸರ್ಸ್ ಯು. ವಿ. ಜೆ. ಶೆಣೈ ಅಂಡ್ ಸನ್ಸ್,**

ಎಸ್. ವಿ. ಟಿ. ರೋಡ್, ಉಡುಪಿ, ದ. ಕ.

## —: ವಿಷಯ ಸೂಚಿ :—

